ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ಕ್ರೀಡಾ ವಸತಿ ಶಾಲೆಗಳ ಬಗ್ಗೆ

ಶ್ರೀ ಮರಿತಿಬ್ಬೇಗೌಡ(ಶಿಕ್ಷಕರ ಕ್ಷೇತ್ರ):-

869 (1116) ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿರುವ ಕ್ರೀಡಾ ವಸತಿ ಶಾಲೆಗಳ ಸಂಖ್ಯೆ ಎಷ್ಟು ;

(ಆ) ಸದರಿ ವಸತಿ ಶಾಲೆಗಳಿಗೆ ಮಂಜೂರಾಗಿರುವ ಬೋಧಕ ತರಬೇತಿದಾರರು ಹಾಗೂ ಬೋಧಕೇತರರ ಹುದ್ದೆಗಳ ಸಂಖ್ಯೆ ಎಷ್ಟು; (ವರ್ಗವಾರು ವಿವರ ನೀಡುವುದು)

(ಇ) ಸದರಿ ವಸತಿ ಶಾಲೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ತರಬೇತಿದಾರರ ಸಂಖ್ಯೆ ಎಷ್ಟು ;

(ಈ) ತರಬೇತಿದಾರರಿಗೆ ನೀಡಲಾಗುತ್ತಿರುವ ಮಾಸಿಕ ಗೌರವಧನವೆಷ್ಟು ; ಯಾವ ಸಮಯದಿಂದ ಕಾರ್ಯನಿರ್ವಹಿಸುತ್ತಿದ್ದಾರೆ ;

(ಉ) ಸದರಿಯವರನ್ನು ಸಕ್ರಮಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ;

(ಊ) ಯಾವ ಕಾಲಮಿತಿಯಲ್ಲಿ ಸಕ್ರಮಗೊಳಿಸಲಾಗುವುದು ?